# ಕರ್ನಾಟಕ ವಿಧಾನ ಪರಿಷತ್

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : | 815 |
| ಸದಸ್ಯರ ಹೆಸರು: | ಡಾ: ವೈ.ಎ. ನಾರಾಯಣಸ್ವಾಮಿ |
| ಉತ್ತರಿಸಬೇಕಾದ ದಿನಾಂಕ: | 17.12.2018 |
| ಉತ್ತರಿಸುವ ಸಚಿವರು: | ಕೃಷಿ ಸಚಿವರು |

| | | |
|---|---|---|
| ಅ) | ರೈತರು ಬೆಳೆದ ಬೆಳೆಗೆ ವೈಜ್ಞಾನಿಕವಾಗಿ ಬೆಲೆ ನಿಗದಿ ಮಾಡಲು ರಚಿಸಲಾಗಿರುವ 'ಕೃಷಿ ಬೆಲೆ ಆಯೋಗ' ರಾಜ್ಯದಲ್ಲಿ ಕಾರ್ಯನಿರ್ವಹಿಸುತ್ತಿದೆಯೇ | ಹೌದು. |
| ಆ) | ಹಾಗಿದಲ್ಲಿ, ಇದುವರೆವಿಗೂ ಈ ಆಯೊಗದಿಂದ ತೆಗೆದುಕೊಂಡ ರೈತ ಪರ ನಿರ್ಧಾರಗಳೇನು; | ಕರ್ನಾಟಕ ಕೃಷಿ ಬೆಲೆ ಆಯೋಗವು ರೈತ ಪರ ಶಿಫಾರಸ್ಸುಗಳನ್ನು ಸರ್ಕಾರಕ್ಕೆ ಅವಶ್ಯಕತೆಗನುಗುಣವಾಗಿ ಆಗಿಂದ್ದಾಗೆ ಮಾಡುತ್ತದೆ.<br>ಪ್ರಮುಖ ರೈತ ಪರ ಶಿಫಾರಸ್ಸುಗಳು:<br>1. ಕೃಷಿ ಹಾಗೂ ತೋಟಗಾರಿಕೆ ಉತ್ಪನ್ನಗಳ ಉತ್ಪಾದನಾ ವೆಚ್ಚವನ್ನು ವೈಜ್ಞಾನಿಕವಾಗಿ ಲೆಕ್ಕಾಚಾರ ಹಾಕಿ, ರೈತರಿಗೆ ಲಾಭದಾಯಕ ವಾಗುವ ನಿಟ್ಟಿನಲ್ಲಿ ಬೆಂಬಲ ಬೆಲೆ ನಿಗದಿಪಡಿಸುವಂತೆ ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡಲು ಸಹಕರಿಸುತ್ತದೆ.<br>2. ರಾಜ್ಯದಲ್ಲಿ ವಿವಿಧ ಬೆಳೆಗಳ ಧಾರಣೆ ಕುಸಿದಾಗ ವಿಳಂಬ ವಾಗದಂತೆ ಶೀಘ್ರವಾಗಿ ಅರಿತು ಮಾರುಕಟ್ಟೆ ಮಧ್ಯ ಪ್ರವೇಶ ಮಾಡಲು ಕೃಷಿ ಬೆಲೆ ಆಯೋಗವು "ಕೃಫ" (ಕೃಷಿ ಧಾರಣೆ ವಿಶ್ಲೇಶಣಾ ಫಲಕ) ಡ್ಯಾಶ್ ಬೋರ್ಡ್‌ನ್ನು ಅಭಿವೃದ್ಧಿಗೊಳಿಸಿ, ಕೃಷಿ ಮಾರಾಟ ಇಲಾಖೆ, ತೋಟಗಾರಿಕಾ ಇಲಾಖೆ, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಗಳಂತಹ ಸಂಬಂಧ ಪಟ್ಟ ಇಲಾಖೆಗಳು ಉಪಯೋಗ ಮಾಡಲು ಅವಕಾಶ ಮಾಡಿಕೊಡಲಾಗಿದೆ. ಇದರಿಂದ ಪ್ರಮುಖ ಕೃಷಿ ಹಾಗೂ ತೋಟಗಾರಿಕಾ ಉತ್ಪನ್ನಗಳ ಬೆಲೆ ವಿಶ್ಲೇಷಣೆ ಹಾಗೂ ಮುನ್ಸೂಚನಾ ಬೆಲೆಯನ್ನು ತಿಳಿಯ ಬಹುದಾಗಿದ್ದು ಈ ಮೂಲಕ ಸರ್ಕಾರವು ಮುಂಚಿತವಾಗಿ ಮಾರುಕಟ್ಟೆ ಮಧ್ಯ ಪ್ರವೇಶ ಮಾಡಲು ಸಹಕಾರಿಯಾಗುತ್ತದೆ.<br>3. ಪ್ರತಿಷ್ಠಿತ ಸಂಸ್ಥೆಗಳಾದ IIPM. ISEC, ಗಳ ಸಹಭಾಗಿತ್ವದಲ್ಲಿ ರೈತರಿಗೆ ಅನುಕೂಲವಾಗುವ ವಿವರ ಅಂಶಗಳ ಅಧ್ಯಯನದ ವರದಿಯನ್ನು ತಯಾರಿಸಿ ಸರ್ಕಾರಕ್ಕೆ ವರದಿ ಸಲ್ಲಿಸುತ್ತಿದ್ದಾರೆ.<br>4. ಕೃಷಿ ಭೂಮಿಯನ್ನು ಬೀಳು ಬಿಡುವುದು, ಭೂ ವಿಚ್ಛಿದ್ರೀಕರಣ ಮತ್ತು ಅಧಿಕೃತ ಗುತ್ತಿಗೆ ಇತ್ಯಾದಿಗಳ ಕುರಿತು ಸಮಗ್ರ ಅಧ್ಯಯನ ಕೈಗೊಂಡು ರೈತರು, ತಜ್ಞರು ಮತ್ತಿತರರೊಡನೆ ಚರ್ಚೆ, ಸಂವಾದವನ್ನು ನಡೆಸಿ, "ರಾಜ್ಯದ ಕೃಷಿ ಬೀಳು ಭೂಮಿಯ ಸದ್ಬಳಕೆ ಹಾಗೂ ಭೂ ಹಿಡುವಳಿ ಕ್ರೋಡಿಕರಣ" ಕುರಿತು ವರದಿಯನ್ನು ತಯಾರಿಸಿ ಸರ್ಕಾರಕ್ಕೆ ಸಲ್ಲಿಸುತ್ತದೆ.<br>5. ಪ್ರಸ್ತುತ ಕೇಂದ್ರ ಸರ್ಕಾರವು ಜಾರಿಗೆ ತಂದಿರುವ GST ಸಾಧಕ-ಭಾಧಕಗಳ ಕುರಿತು ರೈತರಿಗೆ ತೊಂದರೆಯಾಗದ ರೀತಿಯಲ್ಲಿ ವರದಿ ತಯಾರಿಸಿ ಸರ್ಕಾರಕ್ಕೆ ಸಲ್ಲಿಸುತ್ತದೆ.<br>6. ಪಡಿತರ ವ್ಯವಸ್ಥೆಯಲ್ಲಿ ಅಕ್ಕಿಯ ವಿತರಣೆಗೆ ಬದಲಾಗಿ ರಾಗಿ/ಜೋಳ (ಹೈಬ್ರೀಡ್, ಬಿಳಿ ಜೋಳ) ಸಿರಿಧಾನ್ಯಗಳನ್ನು ಬೆಂಬಲ ಬೆಲೆಯಲ್ಲಿ ಖರೀದಿಸಿ ಪಡಿತರ ಕಾರ್ಡ್‌ದಾರರಿಗೆ ವಿತರಿಸುವಂತೆ ಶಿಫಾರಸ್ಸು ಮಾಡಲಾಗಿದೆ.<br>7. ಸರ್ಕಾರದ ಬೆಂಬಲ ಬೆಲೆ ಯೋಜನೆಯಡಿ ಹೈಬ್ರೀಡ್ ಜೋಳವನ್ನು ಮುಸಿಕಿನ ಜೋಳವನ್ನು ಖರೀದಿಸಿ ಪಡಿತರ ವ್ಯವಸ್ಥೆಯಲ್ಲಿ ವಿತರಿಸಲು ಪರಿಗಣಿಸಬೇಕಾಗಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿದೆ.<br>8. ನಿಯಂತ್ರಿತ ಮಾರುಕಟ್ಟೆ ವ್ಯವಸ್ಥೆ (ಎ.ಪಿ.ಎಂ.ಸಿ.) ಸೇರಿದಂತೆ ಅಧಿಕೃತವಾಗಿ ನಡೆಯುವ ಯಾವುದೇ ಮಾರಾಟ **ಅಧಿಕೃತ ಕನಿಷ್ಠ ವ್ಯವಹಾರಿಕ ಬೆಲೆ** *(Statutory Minimum Transaction Price)* ಗಿಂತ ಕೆಳ ಮಟ್ಟದಲ್ಲಿ ನಡೆಯದಂತೆ ಕಾನೂನು ರೂಪಿಸಲು ಸರ್ಕಾರಕ್ಕೆ ಸಲಹೆ ನೀಡಿದೆ. |

| | | |
|---|---|---|
| | | 9. ಉತ್ಪಾದನೆ ಅಧಿಕವಾಗಿ ಆವಕ ಹೆಚ್ಚಾದಾಗ ತಕ್ಷಣ ಮಾರುಕಟ್ಟೆ ಮಧ್ಯಪ್ರವೇಶ ಮಾಡಿ ಖರೀದಿಸುವ ಜವಾಬ್ದಾರಿಯನ್ನು ಮಾರ್ಕ್‌ಫೆಡ್ ಮತ್ತು ತೋಟಗಾರಿಕೆ ಮಹಾಮಂಡಳಿಗಳು ಹೊರತಕ್ಕದ್ದು ಎನ್ನುವ ಸಲಹೆ ನೀಡಲಾಗಿದೆ.<br>10. ರೈತರು ಅಡಮಾನ್ ಸಾಲ *(Pledge Loan)* ವನ್ನು ಸಮರ್ಪಕವಾಗಿ ಬಳಸದಿರುವ ಬಗ್ಗೆ ಹಾಗೆಯೇ ನಿಯಂತ್ರಿತ ಮಾರುಕಟ್ಟೆ (ಎ.ಪಿ.ಎಂ.ಸಿ.) ಯಲ್ಲಿ ಅನಧಿಕೃತವಾಗಿ ರೈತರಿಂದ ಕರ ವಸೂಲಾತಿ ಮಾಡುತ್ತಿರುವ ಬಗ್ಗೆ ಸಮಗ್ರ ತನಿಖೆಯಾಗಿ ಸ್ಪಷ್ಟ ಪರಿಹಾರ ಒದಗಿಸುವ ಕುರಿತು ಸಲಹೆ ನೀಡಲಾಗಿದೆ.<br>11. **ರೈತರಿಗೆ ಲಾಭದಾಯಕ ಬೆಲೆಯ ಹಕ್ಕಿನ** *(Right to Remuneration Price)* ಕಾಯಿದೆ ಜಾರಿಗೆ ತರಬೇಕು ಎನ್ನುವ ಶಿಫಾರಸ್ಸು ಮಾಡಲಾಗಿದೆ.<br>12. ಕಾಫಿ, ರಬ್ಬರ್, ಸಾಂಬಾರು ಮಂಡಳಿಗಳ ಮಾದರಿಯಲ್ಲಿ **ಪ್ರತ್ಯೇಕ ಅಡಕೆ ಮಂಡಳಿ** ಸ್ಥಾಪನೆಯಾಗುವ ನಿಟ್ಟಿನಲ್ಲಿ ಕ್ರಮಕೈಗೊಳ್ಳಲು ಸಲಹೆ ನೀಡಲಾಗಿದೆ.<br>13. **ಉತ್ಪಾದನೆ ವೆಚ್ಚ ಲೆಕ್ಕಾಚಾರ ಮತ್ತು ಮಾರುಕಟ್ಟೆ ಮಾಹಿತಿ ವಿಶ್ಲೇಷಣೆ**ಗೆ ವಿವಿಧ ಕೃಷಿ ಮತ್ತು ತೋಟಗಾರಿಕೆ ವಿಶ್ವವಿದ್ಯಾನಿಲಯ, ಕೃಷಿ, ತೋಟಗಾರಿಕೆ ಮತ್ತು ಮಾರುಕಟ್ಟೆ ಇಲಾಖೆಗಳ ಸಕ್ರಿಯ ಸಹಯೋಗದಿಂದ **ಶಾಶ್ವತ ವ್ಯವಸ್ಥೆ** ರೂಪಿಸಲು ಸಲಹೆ ನೀಡಲಾಗಿದೆ.<br>14. ಕೆ.ಎಂ.ಎಫ್. ಮಾದರಿಯಲ್ಲಿ ದ್ವಿದಳಧಾನ್ಯ ಉತ್ಪಾದಕ ಸಂಘಟನೆಗಳ ಮಹಾಮಂಡಳಿ ರಚಿಸುವುದು, ಈ ಸಾರಿ ಮಾರುಕಟ್ಟೆ ಮಧ್ಯಪ್ರವೇಶ ಮಾಡಿ ಖರೀದಿಸಿ ಪಡಿತರದಲ್ಲಿ ವಿತರಿಸಲು ಸಲಹೆ ನೀಡಲಾಗಿದೆ.<br>15. ಕೃಷಿ ಯಂತ್ರಗಳನ್ನು ಹೊಂದಿರುವ ರೈತರನ್ನು ಪಟ್ಟಿ ಮಾಡಿ ಯಂತ್ರದ ಸೇವೆಯನ್ನು ಇತರೆ ರೈತರಿಗೆ ಸಿಗುವಂತೆ ಮಾಡಲು ಖಾಸಗಿ ಕಾರುಗಳ 'ಓಲಾ'ದಂತೆ ಅಂತರ್ಜಾಲದ ಮೂಲಕ ವಿಸ್ತೃತ ಜಾಲ *(Online Aggregation)* ವ್ಯವಸ್ಥೆ ಏರ್ಪಡಿಸಬೇಕೆಂದು ಸಲಹೆ ನೀಡಲಾಗಿದೆ. |
| ಇ) | ಈ ನಿರ್ಧಾರಗಳಿಂದ ರೈತರಿಗೆ ಆಗಿರುವ ಅನುಕೂಲಗಳೇನು? | ಆಯೋಗದ ಶಿಫಾರಸ್ಸುಗಳಿಂದ/ಅಧ್ಯಯನ ವರದಿಗಳಿಂದ ರೈತರಿಗೆ ಆಗಿರುವ ಅನುಕೂಲಗಳು:<br>I. 2015-16 ನೇ ಸಾಲಿನಲ್ಲಿ ಕೃಷಿ ಬೆಲೆ ಆಯೋಗದ ಉತ್ಪಾದನಾ ವೆಚ್ಚದ ಲೆಕ್ಕಾಚಾರವನ್ನು ಪರಿಗಣಿಸಿ ರಾಗಿ, ಬಿಳಿ ಜೋಳ ಮತ್ತು ಭತ್ತಕ್ಕೆ ಕ್ರಮವಾಗಿ ರೂ.450/-, 510/- ಹಾಗೂ ರೂ.100/-, ಗಳ ಹೆಚ್ಚುವರಿ ಪ್ರೋತ್ಸಾಹ ಧನವನ್ನು ನೀಡಲಾಗಿದೆ.<br>II. ಬೆಲೆ ಆಯೋಗದ ಉತ್ಪಾದನಾ ವೆಚ್ಚ ಆಧರಿಸಿ ಈರುಳ್ಳಿ ಮಾರುಕಟ್ಟೆ ಸ್ಥಿರೀಕರಣಕ್ಕೆ ಪ್ರತಿ ಕ್ವಿಂಟಾಲ್ಗೆ ರೂ.625.00 ರಂತೆ ಬೆಲೆ ನಿಗಧಿಪಡಿಸಿ ಖರೀದಿಸಲಾಗಿರುತ್ತದೆ.<br>III. ಬೆಲೆ ಆಯೋಗದ ಶಿಫಾರಸ್ಸಿನಂತೆ ಕೊಬ್ಬರಿಗೆ ಪ್ರತಿ ಕ್ವಿಂಟಾಲ್‌ಗೆ ರೂ. 1000.00 ಅಧಿಕ ಪ್ರೋತ್ಸಾಹ ಧನ ನೀಡಿ ಖರೀದಿಸಲು ಕ್ರಮ ವಹಿಸಲಾಗಿರುತ್ತದೆ.<br>IV. ಕೃಷಿ ಬೆಲೆ ಆಯೋಗದ ಶಿಫಾರಸ್ಸಿನಂತೆ, ರಾಗಿ, ಜೋಳ, ಹಾಗೂ ತೊಗರಿಯನ್ನು ಪಡಿತರ ವ್ಯವಸ್ಥೆಯಲ್ಲಿ ವಿತರಿಸಲಾಗುತ್ತಿದೆ.<br>V. ಕೇಂದ್ರ ಸರ್ಕಾರವು ಜಾರಿಗೆ ತಂದ ಬೆಂಬಲ ಬೆಲೆಯ 3 ನೂತನ ಯೋಜನೆಗಳನ್ನು ರಾಜ್ಯದಲ್ಲಿ ಅನುಷ್ಠಾನಗೊಳಿಸುವ ಕುರಿತು ಪೂರಕ ವರದಿ ನೀಡಿದ್ದು, ಅದರಂತೆ ಹೆಸರು, ಭತ್ತಗಳ ಉತ್ಪನ್ನವನ್ನು ರೈತರಿಂದ ಬೆಂಬಲ ಬೆಲೆಯಲ್ಲಿ ಖರೀದಿಸಲು ಸಾಧ್ಯವಾಗಿದೆ, ಅಲ್ಲದೆ ಈರುಳ್ಳಿಗೆ ಮಾರುಕಟ್ಟೆಯಲ್ಲಿ ಬೆಲೆ ವ್ಯತ್ಯಾಸ ಪಾವತಿಸುವ ಯೋಜನೆ ಜಾರಿಗೆ ತರಲು ಶಿಫಾರಸ್ಸನ್ನು ಮಾಡಿ: 2018 ಡಿಸೆಂಬರ್ ನಿಂದ ಅನುಷ್ಠಾನ ಗೊಳಿಸಲು ಸರ್ಕಾರ ಆದೇಶಿಸಿದೆ.<br>VI. ಕೃಷಿ ಬೆಲೆ ಆಯೋಗವು ವೈಜ್ಞಾನಿಕವಾಗಿ ಕೃಷಿ ಹಾಗೂ ತೋಟಗಾರಿಕಾ ಉತ್ಪನ್ನಗಳ ಉತ್ಪಾದನ ವೆಚ್ಚ ಲೆಕ್ಕಾಚಾರ ಹಾಕಿ, ಲಾಭದಾಯಕವಾಗುವ ನಿಟ್ಟಿನಲ್ಲಿ ಬೆಂಬಲ ಬೆಲೆ ನಿಗದಿಪಡಿಸಲು ಶಿಫಾರಸ್ಸು ಮಾಡುತ್ತಿದ್ದು ಕೇಂದ್ರ ಸರ್ಕಾರ ರೈತರಿಗೆ ಲಾಭದಾಯಕ ಬೆಂಬಲ ಬೆಲೆ ಘೋಷಿಸದ ಸಂದರ್ಭಗಳಲ್ಲಿ ಅಂತಹ ಅತ್ಪನ್ನಗಳಿಗೆ ಬೆಂಬಲ ಬೆಲೆಯ ಜೊತೆಗೆ ಪ್ರೋತ್ಸಾಹ ಧನ (Incentive) ನೀಡಲು ಸಹಕಾರಿಯಾಗಿದೆ. |

**ಸಂಖ್ಯೆ:ಕೃಇ 156 ಕೃಇಕ 2018**

**(ಎನ್.ಹೆಚ್. ಶಿವಶಂಕರ ರೆಡ್ಡಿ)**
**ಕೃಷಿ ಸಚಿವರು**